# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 220
2. ಸದಸ್ಯರ ಹೆಸರು : ಶ್ರೀ ದಿನೇಶ ಗೂಳಿಗೌಡ
3. ಉತ್ತರಿಸಬೇಕಾದ ದಿನಾಂಕ : 17-02-2022

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಂಡ್ಯ ಜಿಲ್ಲೆಯಲ್ಲಿ ವಿಶ್ವೇಶ್ವರಯ್ಯ ನಾಲೆಯ ಸರಪಳಿ 0.00 ಕಿ.ಮೀ. ನಿಂದ 49.25 ಕಿ.ಮೀ. ವರೆಗಿನ ಆಧುನೀಕರಣ ಕಾಮಗಾರಿ ಯಾವಾಗ ಪ್ರಾರಂಭವಾಯಿತು; | ದಿನಾಂಕ:16.01.2020 ರಂದು ಕಾಮಗಾರಿಯ ಸ್ಥಳವನ್ನು ವಹಿಸಿಕೊಟ್ಟು ವಿಶ್ವೇಶ್ವರಯ್ಯ ನಾಲೆಯ ಸರಪಳಿ 0.00 ಕಿ.ಮೀ. ನಿಂದ 46.25 ಕಿ.ಮೀ. ವರೆಗಿನ ಆಧುನೀಕರಣ ಕಾಮಗಾರಿಯನ್ನು ಪ್ರಾರಂಭಿಸಲಾಗಿದೆ. |
| ಆ | ಈ ಯೋಜನೆಗೆ ಸರ್ಕಾರ ನಿಗದಿಪಡಿಸಿರುವ ಅನುದಾನವೆಷ್ಟು; | 2021-22ನೇ ಸಾಲಿನಲ್ಲಿ ಸದರಿ ಕಾಮಗಾರಿಗೆ ರೂ.42.21 ಕೋಟಿಗಳ ಅನುದಾನವನ್ನು ನಿಗದಿಪಡಿಸಲಾಗಿದೆ. |
| ಇ | ಸದರಿ ಯೋಜನೆಯ ಕಾಮಗಾರಿಯನ್ನು ಯಾವ ಕಂಪನಿ ಅಥವಾ ವ್ಯಕ್ತಿಗೆ ನೀಡಲಾಗಿದೆ; | ವಿಶ್ವೇಶ್ವರಯ್ಯ ಮುಖ್ಯ ನಾಲೆಯ ಸರಪಳಿ 0.00 ಕಿ.ಮೀ ನಿಂದ 46.25 ಕಿ.ಮೀ (ಫೇಸ್-2 ಪ್ಯಾಕೇಜ್-1ಎ) ಆಧುನೀಕರಣ ಕಾಮಗಾರಿಯನ್ನು Sri Venkataramane Gowda (Star Infratech- Formerly, Known as Star Builders And Developers) ರವರಿಗೆ ಕರಾರು ಮುಖಾಂತರ ದಿನಾಂಕ:17.12.2019 ರಂದು ವಹಿಸಿಕೊಡಲಾಗಿದೆ. |
| ಈ | ಕಾಮಗಾರಿಯನ್ನು ಪೂರ್ಣಗೊಳಿಸಲು ಸರ್ಕಾರ ನಿಗದಿಪಡಿಸಿರುವ ಕಾಲಮಿತಿ ಎಷ್ಟು; | ಸದರಿ ಕಾಮಗಾರಿಯ ಗುತ್ತಿಗೆ ಅವಧಿ 18 ತಿಂಗಳುಗಳು (ಮಳೆಗಾಲ ಸೇರಿ) ಆಗಿದ್ದು, ಕಾಮಗಾರಿಯ ಸ್ಥಳವನ್ನು ದಿನಾಂಕ:16.01.2020 ರಂದು ವಹಿಸಿಕೊಡಲಾಗಿದ್ದು, ಟೆಂಡರ್ ಕರಾರಿನಂತೆ ದಿನಾಂಕ:15.07.2021 ರಂದು ಪೂರ್ಣಗೊಳಿಸಬೇಕಿರುತ್ತದೆ. |
| ಉ | ಕಾಲಮಿತಿಯೊಳಗೆ ಗುತ್ತಿಗೆದಾರರು ಕಾಮಗಾರಿಯನ್ನು ಪೂರ್ಣಗೊಳಿಸದಿದ್ದಲ್ಲಿ ಅಂತಹ ಗುತ್ತಿಗೆದಾರರ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ಒದಗಿಸುವುದು) | • ಕಾಮಗಾರಿಯನ್ನು ಪೂರ್ಣಗೊಳಿಸಲು ಇಲಾಖೆಯಿಂದ ವಿಳಂಬವಾಗಿದ್ದಲ್ಲಿ, ಗುತ್ತಿಗೆದಾರರಿಗೆ ಯಾವುದೇ ದಂಡ ವಿಧಿಸದೇ, ಅಧಿಕಾರ ಪ್ರತ್ಯಾಯೋಜನೆಯಂತೆ ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆದು ಕಾಲಾವಧಿ ವಿಸ್ತರಣೆಯನ್ನು ನೀಡಲಾಗುವುದು.<br>• ಮುಂದುವರೆದು, ಗುತ್ತಿಗೆದಾರರಿಂದ ಆದ ವಿಳಂಬಕ್ಕೆ ಟೆಂಡರ್ ಕರಾರಿನ ಕಲಂಗಳ ಅನ್ವಯ ಪರಾಮರ್ಶಿಸಿ ಗರಿಷ್ಠ 10% ಕರಾರು ಮೊತ್ತಕ್ಕೆ ದಂಡ ವಿಧಿಸಲು ಅವಕಾಶ ಇರುತ್ತದೆ. |

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | • ಪ್ರಸ್ತುತ ಕಾಮಗಾರಿಯನ್ನು ವಹಿಸಿಕೊಟ್ಟ ದಿನಾಂಕದಿಂದಲೂ ಆಯಾ ಸಾಲುಗಳಲ್ಲಿ ಮುಂಗಾರು ಬೆಳೆ ಮತ್ತು ಹಿಂಗಾರು ಬೆಳೆ/ಬೇಸಿಗೆ ಅವಧಿಯಲ್ಲಿ Perennial Sugarcane crops ಗೆ ನೀರು ಹರಿಸಿದ್ದು, ಕಾಮಗಾರಿ ಅನುಷ್ಠಾನಗೊಳಿಸಲು ಅಲ್ಪಕಾಲಾವಧಿ ಲಭ್ಯವಾದ್ದರಿಂದ ಕಾಮಾಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ.<br>• ಒಂದು ಹಂಗಾಮಿನ ಪೂರ್ಣ ಅವಧಿಗೆ ನೀರು ನಿಲ್ಲಿಸಿ ಕಾಮಗಾರಿಯನ್ನು ಕೈಗೊಂಡಿದ್ದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗುತ್ತದೆ. ಈ ವಿಷಯವನ್ನು ನೀರಾವರಿ ಸಲಹಾ ಸಮಿತಿ ಸಭೆಗಳಲ್ಲಿ ಸತತವಾಗಿ ಮಂಡನೆ ಮಾಡಿ ಚರ್ಚಿಸಿದಾಗ್ಯೂ ಸೂಕ್ತ ನಿರ್ಣಯ ಕೈಗೊಳ್ಳಲಾಗಿರುವುದಿಲ್ಲ.<br>• ಕಾಲುವೆಯಲ್ಲಿ ನೀರು ಹರಿಯುವುದನ್ನು ಸ್ಥಗಿತಗೊಳಿಸಿದಾಗ, ಲಭ್ಯವಾದ 2 ತಿಂಗಳ ಅವಧಿಯಲ್ಲಿ ಸುಮಾರು 950 ಮೀ. ಗಳ ಉದ್ದಕ್ಕೆ ಕಾಂಕ್ರೀಟ್ ಲೈನಿಂಗ್ ಕಾಮಗಾರಿಯನ್ನು ನಿರ್ವಹಿಸಲಾಗಿದೆ.<br>• ಸದರಿ ಕಾಮಗಾರಿಯನ್ನು ಶೀಘ್ರವಾಗಿ ಪೂರ್ಣಗೊಳಿಸಲು ಕ್ರಮವಹಿಸಲಾಗುವುದು, ಹಾಗೂ ಕಾಮಗಾರಿ ಪೂರ್ಣಗೊಂಡ ನಂತರ ವಿಳಂಬವನ್ನು ಪರಾಮರ್ಶಿಸಿ ಕರಾರಿನ ಕಲಂಗಳನ್ವಯ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ದಂಡ ವಿಧಿಸಲಾಗುವುದು. |

*ಸಂಖ್ಯೆ:ಜಸಂಇ 18 ಎನ್‌ಎಲ್‌ಎ 2022*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು